# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2036

ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ

21-3-2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ನಿರ್ಭಯ ಯೋಜನೆಯಡಿಯಲ್ಲಿ ನಗರ ಬಸ್ಸುಗಳಲ್ಲಿ ಪ್ರಯಾಣಿಸುವ ಮಹಿಳಾ ಸುರಕ್ಷತೆಗೆ ಅನುದಾನ ನೀಡಿರುವುದು ನಿಜವೇ; ಆಗಿದ್ದಲ್ಲಿ, ಈ ಯೋಜನೆಯಡಿಯಲ್ಲಿ ರಾಜ್ಯ ಸರ್ಕಾರಕ್ಕೆ ದೊರೆತಿರುವ ಅನುದಾನವೆಷ್ಟು; (ಪೂರ್ಣ ವಿವರ ನೀಡುವುದು) | ಹೌದು<br><br>ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ "ನಿರ್ಭಯಾ" ಯೋಜನೆಯಡಿಯಲ್ಲಿ ಮಹಿಳಾ ಪ್ರಯಾಣಿಕರ ಸುರಕ್ಷತೆಗಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರ ಕ್ರಮವಾಗಿ ಶೇಕಡ 60:40 ರ ಅನುಪಾತದಲ್ಲಿ ಒಟ್ಟು ರೂ.56.07 ಕೋಟಿ ಅನುದಾನ ಮಂಜೂರಾಗಿರುತ್ತದೆ.<br><br>ಅದರನ್ವಯ ಕೇಂದ್ರ ಸರ್ಕಾರದ ಪಾಲಿನ ಅನುದಾನ ರೂ.33.64 ಕೋಟಿ ಹಾಗೂ ರಾಜ್ಯ ಸರ್ಕಾರದ ಪಾಲಿನ ಅನುದಾನ ರೂ.22.43 ಕೋಟಿ ಬಿಡುಗಡೆಯಾಗಿದೆ. |
| (ಆ) | ನಿರ್ಭಯ ಯೋಜನೆಯಡಿಯಲ್ಲಿ ದೊರೆತಿರುವ ಅನುದಾನವನ್ನು ಯಾವ ರೀತಿ ಬಳಸಿಕೊಳ್ಳಬೇಕೆಂದು ಕೇಂದ್ರ ಸರ್ಕಾರ ಮಾರ್ಗದರ್ಶನ ನೀಡಿದೆಯೇ; (ವಿವರ ನೀಡುವುದು) | "ನಿರ್ಭಯಾ" ಯೋಜನೆಯ ಅನುದಾನ ಬಳಕೆ ಕುರಿತು ಕೇಂದ್ರ ಸರ್ಕಾರವು ಯಾವುದೇ ಮಾರ್ಗದರ್ಶನ ನೀಡಿರುವುದಿಲ್ಲ. ಆದರೆ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಿಂದ "ನಿರ್ಭಯಾ" ಯೋಜನೆಯಡಿ ಮಹಿಳಾ ಪ್ರಯಾಣಿಕರ ಸುರಕ್ಷತೆಯ ಕುರಿತು ಸಲ್ಲಿಸಲಾದ ಯೋಜನೆಗಳ ಪ್ರಸ್ತಾವನೆಗೆ ಕೇಂದ್ರ ಸರ್ಕಾರವು ಅನುಮೋದನೆ ನೀಡಿದ್ದು ಅದರಂತೆ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ವಿವರಗಳು ಕೆಳಕಂಡಂತಿದೆ:<br>➢ ಮಹಿಳೆಯರಿಗೆ ಉಚಿತ ಲಘು ಮತ್ತು ಭಾರಿ ವಾಹನ ಚಾಲನಾ ತರಬೇತಿ ನೀಡಿ ಪ್ರಾದೇಶಿಕ ಸಾರಿಗೆ ಕಛೇರಿಯಿಂದ ಲಘು/ಭಾರಿ ವಾಹನ ಚಾಲನಾ ಪರವಾನಗಿಯನ್ನು ನೀಡಲಾಗುತ್ತಿದೆ.<br>➢ ಮಹಿಳಾ ಪ್ರಯಾಣಿಕರ ಸುರಕ್ಷತೆಯ ಬಗ್ಗೆ ಚಾಲನಾ ಸಿಬ್ಬಂದಿಗಳಿಗೆ "ಲಿಂಗ ಸಂವೇದನಾ ತರಬೇತಿ" ಯನ್ನು ನೀಡಲಾಗುತ್ತಿದೆ.<br>➢ ಪ್ರಮುಖ 14 ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಕೊಠಡಿಗಳ ನಿರ್ಮಾಣ ಮಾಡಲಾಗಿದೆ.<br>➢ ಮಹಿಳಾ ಪ್ರಯಾಣಿಕರ ಸುರಕ್ಷತೆ ಮತ್ತು ಭದ್ರತೆಗಾಗಿ 25 ಪಿಂಕ್ ಸಾರಥಿ ಪ್ಯಾಟ್ರೋಲ್ ವಾಹನಗಳನ್ನು ಖರೀದಿಸಿ ಕಾರ್ಯಚರಣೆ ಮಾಡಲಾಗುತ್ತಿದೆ.<br>➢ ಮಹಿಳೆಯರ ಸುರಕ್ಷತೆ ಬಗ್ಗೆ ಜಾಹೀರಾತು ಮತ್ತು ಜಾಗೃತಿ ಅಭಿಯಾನಗಳನ್ನು ಕೈಗೊಳ್ಳಲಾಗುತ್ತಿದೆ.<br>➢ ಸಂಸ್ಥೆಯ 1000 ಬಸ್ಸುಗಳಲ್ಲಿ ಸಿ.ಸಿ.ಕ್ಯಾಮರಾ ಅಳವಡಿಕೆ ಕಾರ್ಯ ಪ್ರಗತಿಯಲ್ಲಿದೆ. |

| | | |
|---|---|---|
| | | ➢ ಮಹಿಳಾ ಪ್ರಯಾಣಿಕರ ಸುರಕ್ಷತೆ ದೃಷ್ಟಿಯಿಂದ ಕೆಳಕಂಡ ವೈಶಿಷ್ಟಗಳನ್ನು ಒಳಗೊಂಡ ಮೊಬೈಲ್ ಅಪ್ಲಿಕೇಷನ್‌ನ್ನು ಅಭಿವೃದ್ಧಿ ಕಾರ್ಯವು ಪ್ರಗತಿಯಲ್ಲಿದೆ.<br>o WI-FI enabled panic button.<br>o Integration with CC Cameras.<br>o Integration of mobile app with Bengaluru Police's "Suraksha App" and BMTC Sarathi Squads.<br>➢ ಬಸ್ ನಿಲ್ದಾಣಗಳಲ್ಲಿ ಪ್ಯಾಸೆಂಜರ್ ಇನ್‌ಫಾರ್ಮೇಷನ್ ಡಿಸ್‌ಪ್ಲೇ ಅಳವಡಿಕೆ ಕಾರ್ಯ ಪ್ರಗತಿಯಲ್ಲಿದೆ. |
| (ಇ) | ಈ ಮಾರ್ಗದರ್ಶನದ ಅನ್ವಯ ರಾಜ್ಯ ಸರ್ಕಾರ ಸಾರಿಗೆ ಸಂಸ್ಥೆಗಳಿಗೆ ಅನುದಾನ ಬಿಡುಗಡೆ ಮಾಡಿದ ಮೊತ್ತವೆಷ್ಟು; ಮತ್ತು ಈ ಸಾರಿಗೆ ಸಂಸ್ಥೆಗಳು ಯಾವ ರೀತಿ ಸುರಕ್ಷತೆಯನ್ನು ಮಹಿಳಾ ಪ್ರಯಾಣಿಕರಿಗೆ ನೀಡಲು ಅನುದಾನವನ್ನು ಬಳಸಿಕೊಂಡಿವೆ; (ಪೂರ್ಣ ವಿವರ ನೀಡುವುದು) | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ "ನಿರ್ಭಯಾ" ಯೋಜನೆಯಡಿಯಲ್ಲಿ ರಾಜ್ಯ ಸರ್ಕಾರವು ರೂ.22.43 ಕೋಟಿ ಅನುದಾನ ಬಿಡುಗಡೆ ಮಾಡಿದೆ.<br><br>ಸದರಿ ಅನುದಾನವನ್ನು ಉಪ ಪ್ರಶ್ನೆ (ಆ)ರಲ್ಲಿ ಉತ್ತರಿಸಿರುವಂತೆ ಬಳಕೆ ಮಾಡಲಾಗುತ್ತಿದೆ. |
| (ಈ) | ಒಂದು ವೇಳೆ, ನಿರ್ಭಯ ಯೋಜನೆ ಅಡಿಯಲ್ಲಿ ಬಿಡುಗಡೆಯಾದ ಅನುದಾನವನ್ನು ಸಕಾಲಿಕವಾಗಿ ಬಳಸದಿದ್ದಲ್ಲಿ, ಈ ಅನುದಾನವನ್ನು ಹಿಂತಿರುಗಿಸಬೇಕೆಂದು ಕೇಂದ್ರ ಸರ್ಕಾರ ಷರತ್ತು ವಿಧಿಸಿದೆಯೇ? (ಪೂರ್ಣ ವಿವರ ನೀಡುವುದು) | ನಿರ್ಭಯ ಯೋಜನೆ ಅಡಿಯಲ್ಲಿ ಬಿಡುಗಡೆಯಾದ ಅನುದಾನವನ್ನು ಸಕಾಲಿಕವಾಗಿ ಬಳಸದಿದ್ದಲ್ಲಿ, ಈ ಅನುದಾನವನ್ನು ಹಿಂತಿರುಗಿಸಬೇಕೆಂದು ಕೇಂದ್ರ ಸರ್ಕಾರ ಷರತ್ತು ವಿಧಿಸಿರುವುದಿಲ್ಲ.<br><br>ಆದರೆ "ನಿರ್ಭಯ" ಯೋಜನೆ ಅಡಿಯಲ್ಲಿ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಳಸಿಕೊಂಡು ಬಳಕೆ ಪ್ರಮಾಣಪತ್ರ ಸಲ್ಲಿಸಲು ನಿರ್ದೇಶನವಿರುತ್ತದೆ. |

ಸಂಖ್ಯೆ: ಟಿಡಿ 134 ಟಿಸಿಕ್ಯೂ 2019

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು